# ವಾಂಗಾರಿ ಮಾಥಾಯ್

## ಕೋಟಿಗಟ್ಟಲೆ ಮರ ಹಚ್ಚಿದವಳು



# ವಾಂಗಾರಿ ಮಾಥಾಯ್

## ಕೋಟಿಗಟ್ಟಲೆ ಮರ ಹಚ್ಚಿದ ಮಹಿಳೆ

ಫ್ರಾಂಕ್ ಪ್ರಿವೋಟ್



ಈಗಲೂ ಕೂಡ ವಾಂಗಾರಿ ಮಾಥಾಯ್ ಜೀವಂತವಿದ್ದಾಳೆ ಎಂದೆನ್ನಿಸುತ್ತದೆ. ಏಕೆಂದರೆ ಅವಳು ನೆಟ್ಟ ಗಿಡಗಳೆಲ್ಲ ಇನ್ನೂ ಬೆಳೆಯುತ್ತಲಿವೆ. ವಾಂಗಾರಿಯ ಹಾಗೆ ಈ ಪೃಥ್ವಿಯಲ್ಲಿ ಆಸ್ಥೆ ಇರುವವರೆಲ್ಲರೂ. ಗಿಡಗಳ ಮಾತುಗಳನ್ನು, ನಾಲ್ಕೂ ಭಾಷೆಗಳಲ್ಲಿ – ಕಿಕೂ, ಸ್ವಾಹಿಲಿ, ಇಂಗ್ಲಿಷ್ ಹಾಗೂ ಫ್ರೆಂಚ –ಕೇಳುತ್ತಿರಬಹುದು. ವಾಂಗಾರಿ ತನ್ನ ಆಯುಷ್ಯದಲ್ಲಿ ಎಷ್ಟೋ ಮಹನೀಯರ ಜೊತೆ ಕೆಲಸ ಮಾಡಿದ್ದಾಳೆ.





ವಾಂಗಾರಿ ತನ್ನ ಊರಲ್ಲಿಯ ಎಷ್ಟೋ ಮಹಿಳೆಯರನ್ನುಈ ಕೆಲಸಕ್ಕಾಗಿ ಹುರಿದುಂಬಿಸುತ್ತಿದ್ದಳು.  ಇವರೆಲ್ಲರೂ ಕೆಂಪು ಮಣ್ಣಿನಲ್ಲಿ ತೆಗ್ಗನ್ನು ಅಗೆದು ಇಂದಿನ ದಿನಗಳಿಗಾಗಿ ನೆಮ್ಮದಿ ಹಾಗು ಮುಂಬರುವ  ದಿನಗಳಿಗಾಗಿ ಆಶೆಯ ಬೀಜಗಳನ್ನು ಬಿತ್ತಿದರು.



ದೊಡ್ಡ ಎಲೆಗಳ ಎಬೊನಿ ಇಲ್ಲವೆ ಆಫ್ರಿಕೆಯ ಟ್ಯೂಲಿಪ ಗಿಡಗಳನ್ನು ವಾಂಗಾರಿ ನೆಡುವಾಗ ಅವಳಿಗೆ ತನ್ನ ಬಾಲ್ಯ ದಿನಗಳ ನೆನಪಾಗುತ್ತಿತ್ತು.. ಅವಳು 1940 ರಲ್ಲಿ ಮೌಂಟ ಕೆನಿಯಾದ ಎದುರಿದ ಜ್ವಾಲಾಮುಖಿ ಉಗ್ಗುತ್ತಿರುವ ಇಜ್ತೆಹ ಎಂಬ ಹಳ್ಳಿಯಲ್ಲಿ ಹುಟ್ಟಿದಳು. ವಾಂಗಾರಿ ಜನಾಂಗ ಜ್ವಾಲಾಮುಖಿಯನ್ನು ಪವಿತ್ರವೆಂದು ನಂಬಿದ್ದರು.

ಇದು ವಾಂಗಾರಿಯ ಕತೆ.



ವಾಂಗಾರಿ ಜನಾಂಗವು ‘ತಮ್ಮ ಜೊತೆ ಚಿರತೆ ಕೂಡ ಇರುತ್ತದೆ.’ ಎಂದು ನಂಬಿಕೆ ಇಟ್ಟಿತ್ತು. ಏಕೆಂದರೆ ಅವರ ಭಾಷೆಯಲ್ಲಿ ವಾಂಗಾರಿ ಈ ಶಬ್ದವು ವಾನ್ – ಗಾರಿ ಎಂಬ ಶಬ್ದಗಳಿಂದ ಬಂದಿದೆ ಹಾಗು ಗಾರಿ ಎಂದರೆ ಚಿರತೆ. ಮತ್ತು ವಾಂಗಾರಿ ಎಂದರೆ ‘ಚಿರತೆಯ ಜೊತೆ ನಂಟುತನವಿದ್ದವಳು’ ಎಂಬರ್ಥ. ಇವಳಿಗೆ ತಾನು ಈ ಪೂರ್ಣ ಕಾಡಿನ ಒಂದು ಪಾಲುಗಾರಳು ಎಂದು ಅನ್ನಿಸುತ್ತಿತ್ತು.

ವಾಂಗಾರಿ ಪ್ರತಿ ದಿನ ಮುಗಮೊ ಎಂಬ ಗಿಡದ ಕೆಳಗಿನಿಂದ ನೀರು ತರುತ್ತಿದ್ದಳು. ಐದು ಅಣ್ಣ-ತಂಗೆಂದಿರಲ್ಲಿ ಇವಳೇ ಹಿರಿಯವಳಾದ್ದರಿಂದ ಮನೆಯಲ್ಲಿಯ ಇನ್ನುಳಿದ ಹೆಂಗಳೆಯರಿಗಾಗಿ ಮತ್ತು ತಾಯಿಗಾಗಿ ಇವಳು ಸಾಕಷ್ಟು ಕೆಲಸಗಳಲ್ಲಿ ನೆರವಾಗುತ್ತಿದ್ದಳು. – ಉರುವಲು ಕಟ್ಟಿಗೆ ತರುವದು, ಅಡಿಗೆ ಮಾಡುವದು, ಚಿಕ್ಕ ಮಕ್ಕಳನ್ನು ಆಡಿಸುವದು, ಹೊಲದಲ್ಲಿ ಕೆಲಸ ಮಾಡುವದು .





ವಾಂಗಾರಿಯ ತಾಯಿ ಮಕ್ಕಳಿಗಾಗಿ ಒಂದು ಚಿಕ್ಕ ಕೈದೋಟವನ್ನು ಕೊಟ್ಟಿದ್ದಳು. ವಾಂಗಾರಿ ಅಲ್ಲಿ ತೆಗ್ಗು ಹಡ್ಡಿ ಸಸಿಗಳನ್ನು ನೆಡುವದನ್ನು ಕಲಿತಳು. ದೊಡ್ಡ ಮುಗುಮೊ (ಅಂಜೀರು)ಮರದ ನೆರಳಿನಲ್ಲಿ ಕುಳಿತಾಗ ವಾಂಗಾರಿಯ ತಾಯಿ ‘ಇದರಲ್ಲಿಯ ಕಟ್ಟಿಗೆಗಿಂತ ಈ ಮರದ  ಮೂಲ್ಯ ಇನ್ನು ಹೆಚ್ಚಿದೆ.’ ಎಂದು ಹೇಳಿದ್ದನ್ನು ಅವಳು ಎಂದಿಗೂ ಮರೆಯಲಿಲ್ಲ.

ವಾಂಗಾರಿಯ ತಂದೆ ಸರ್ ನೇಲಾನ್ ಎಂಬ ಬ್ರಿಟಿಶ್ ವಸಾಹತುಗಾರನ ಕೈಕೆಳಗೆ ಕೆಲಸ ಮಾಡುತ್ತಿದ್ದರು. ಬ್ರಿಟಿಶರು ಅಲ್ಲಿಯ ಎಲ್ಲ ಫಲವತ್ತಾದ ಭೂಮಿಗಳ ಒಡೆಯರು. ಕೆನಿಯನ್ ರು ಖ್ರಿಶ್ಚನ್ ಹೆಸರುಗಳನ್ನೇ ಇಡಬೇಕು ಎಂದು ಅವರ ಆಗ್ರಹ. ಹೀಗಾಗಿ ವಾಂಗಾರಿಗೆ ಚಿಕ್ಕಂದಿನಲ್ಲಿ ಮಿರಿಯಮ್ ಎಂಬ ಹೆಸರಿನಿಂದ ಕರೆಯುತ್ತಿದ್ದರು. ಚಹದ ತೋಟಗಳನ್ನು ಮಾಡಲೆಂದು ಬ್ರಿಟಿಶರು ಕಾಡಿನಲ್ಲಿಯ ಮರಗಳನ್ನು ಕಡಿಯುತ್ತಿದ್ದರು.
ವಾಂಗಾರಿಯು ಗಿಡಗಳು ಕುಸಿದು ಬೀಳುವದನ್ನು ನೋಡಿದ್ದಳು. ತನ್ನ ಕೈಯಿಂದ ಮತ್ತು ಬಾಯ್ಮಾತಿನಿಂದ ಇದನ್ನೆಲ್ಲ ಬದಲಿಸಬಹುದು ಎಂಬುದು ಅವಳಿಗೆ ಆಗ ತಿಳಿದಿರಲಿಲ್ಲ.





ಒಂದು ಸಂಜೆ, ಸೆಗಣಿ ಮತ್ತು ಮಣ್ಣಿನಿಂದ ಮಾಡಿದ ಗೋಡೆಗಳಿರುವ ಆ ಚಿಕ್ಕ ಮನೆಯಲ್ಲಿ ವಾಂಗಾರಿಯ ತಮ್ಮ, ಎಂಡೆರಿತು ತನ್ನ ತಾಯಿಗೆ ಒಂದು ಪ್ರಶ್ನೆಯನ್ನು ಕೇಳಿದನುಃ
“ವಾಂಗಾರಿ ಶಾಲೆಗೆ ಏಕೆ ಹೋಗುವದಿಲ್ಲ?”
ವಾಂಗಾರಿಗೆ ಅದರ ಉತ್ತರ ಮೊದಲೇ ಗೊತ್ತಿತ್ತು. ಹೆಣ್ಣು ಮಕ್ಕಳು ಮದುವೆಯಾಗುವವರೆಗೆ ಮತ್ತು ಅವರಿಗೆ ಮಕ್ಕಳಾಗುವವರೆಗೆ ತಮ್ಮ ತಾಯಂದಿರಿಗೆ ಮನೆಗೆಲಸಗಳಲ್ಲಿ ಸಹಾಯ ಮಾಡಲೇಬೇಕು.
ಆದರೆ ತಿಳಿವಳಿಕೆ ಬರುವ ಮೊದಲೇನೆ ಎಂಡೆರಿತು ಪ್ರಶ್ನೆ ಕೇಳಿ ಬದಲಾವಣೆಯ ಅಡಿಗಲ್ಲನ್ನು ಇಟ್ಟನು.

ಕೆಲ ದಿನಗಳಾದ ಮೇಲೆ ವಾಂಗಾರಿ ತನ್ನ ಅಣ್ಣ-ತಮ್ಮಂದಿರ ಜೊತೆಯಲ್ಲಿ ಸಂತಸದಿಂದ ಶಾಲೆಗೆ ಹೋಗತೊಡಗಿದಳು. ಎಂಡೆರಿತು ಪ್ರಶ್ನೆ ಕೇಳಿದ್ದಕ್ಕೆ ಮತ್ತು ಅವಳ ತಾಯಿ ಕೂಡಲೆ ಶಾಲೆಗೆ ಕಳಿಸುವ ನಿರ್ಣಯಕ್ಕೆ ಬಂದಿದ್ದಕ್ಕೆ ವಾಂಗಾರಿ ಧನ್ಯವಾದಗಳನ್ನು ಕೊಟ್ಟಳು.

ಈ ನಿರ್ಣಯವೇ ಅವಳ ಬದುಕನ್ನೇ ಬದಲಾಯಿಸಿತು. ವಾಂಗಾರಿಗೆ ಎಲ್ಲದರ ಬಗ್ಗೆ ಕುತೂಹಲವಿತ್ತು. ಶಾಲೆಯು ಅವಳಿಗೆ ಎಲ್ಲವನ್ನು ತಿಳಿಸಿ ಹೇಳುತ್ತಿತ್ತು. ಇನ್ನುಳಿದ ಎಲ್ಲ ಆಫ್ರಿಕನ್ ಹುಡುಗಿಯರಿಗೆ ಓದಲೂ ಕೂಡ ಬರುತ್ತಿರಲಿಲ್ಲ. ಇವಳು ಮಾತ್ರ ಹಾಯ್ ಸ್ಕೂಲ್ ಡಿಪ್ಲೋಮಾ ತೇರ್ಗಡೆ ಹೊಂದಿದಳು.





ರಾಷ್ಟ್ರಾಧ್ಯಕ್ಷ ಜಾನ್ ಎಫ್ ಕೆನೆಡಿ ಸೆನೆಟರ್ ಇದ್ದಾಗ ಕೆನಿಯಾದ **600** ವಿದ್ಯಾರ್ಥಿಗಳಿಗೆ ಅಮೇರಿಕೆಯಲ್ಲಿ ಶಿಕ್ಷಣ ಪಡೆಯಲು ಆಸ್ಪದ ಮಾಡಿಕೊಟ್ಟರು.
ವಾಂಗಾರಿ ಈ **600** ವಿದ್ಯಾರ್ಥಿಗಳಲ್ಲಿ ಒಬ್ಬಳು.
ಮುಂದಿನ ಐದು ವರುಷ ಹಿಮಮಳೆ, ಮುಗಿಲೆತ್ತರದ ಕಟ್ಟಡಗಳು ಮತ್ತು ಅವಳಿಗಿಂತ ಬೇರೆ ಕಾಣುವ ಜನಜಂಗುಳಿ ಅವಳು ಕಾಣುತ್ತಿದ್ದಳು.
ಅಮೇರಿಕೆಯಲ್ಲಿಯ ಗೋವಿನ ಜೋಳದ ಬೆಳೆ ಕೂಡ ಅವಳ ಹುಟ್ಟೂರಿನಲ್ಲಿ ಇದ್ದಂತೆ ಇರಲಿಲ್ಲ.
ಇಂತಹ ಮಹಾ, ಸ್ವತಂತ್ರ ಮತ್ತು ಮುಕ್ತ ದೇಶದಲ್ಲಿ ಕೂಡ ಕಪ್ಪು ಬಣ್ಣದ ಜನರಿಗೆ ಎಲ್ಲ ಸ್ಥಳಗಳಲ್ಲಿ ಪ್ರವೇಶವಿರಲಿಲ್ಲ. ತನ್ನ ದೇಶದಲ್ಲಿದ್ದಂತೆ ಇಲ್ಲಿಯ ಕೆಲ ಶಾಲೆಗಳು ಕೇವಲ ಶ್ವೇತ ವರ್ಣದವರಿಗೆ ಮೀಸಲಾಗಿದ್ದವು. **1960** ರಲ್ಲಿ ರೊಚ್ಚಿಗೆದ್ದ ಆಫ್ರೋ-ಅಮೇರಿಕನ್ ಸಮುದಾಯ ಬಿಳಿ ಜನರಂತೆ ತಮಗೂ ಸರಿಸಮ ಹಕ್ಕುಗಳು ಬೇಕು ಎಂದು ಹೋರಾಟ ನಡೆಸಿತು.
ಇದೇ ಕಾಲದಲ್ಲಿ ದೂರದಲ್ಲಿದ್ದ ಕೆನಿಯಾದಲ್ಲಿ ಕೂಡ ಉಗ್ರ ಆಂದೋಲನೆಯು ಯಶಸ್ವಿಯಾಗತೊಡಗಿತು. **10** ವರುಷಗಳಿಗೆ ಮೇಲು ಇಲ್ಲಿಯ ಕೃಷ್ಣವರ್ಣದ ಜನ ತಮ್ಮ ಭೂಮಿಯನ್ನು ತಾವೇ ಊಳಲು ಮತ್ತು ದೇಶ ಸ್ವತಂತ್ರವಾಗಬೇಕೆಂದು ಪ್ರತಿಭಟಿಸುತ್ತಿದ್ದರು. ಕೊನೆಗೆ ಬ್ರಿಟನ್ ಇವರಿಗೆ ಸ್ವಾತಂತ್ರ್ಯ ಕೊಟ್ಟು ದೇಶ ಬಿಟ್ಟು ಹೊರಹೋಯಿತು.

ವಾಂಗಾರಿ ಮರಳಿ ಬಂದಾಗ ಬ್ರಿಟಿಶ ವಸಾಹತುಗಾರರು ಕೆನಿಯಾದ ಒಡೆತನ ಬಿಟ್ಟು ಹೋಗಿದ್ದರು. ದೇಶ ಸ್ವತಂತ್ರವಾಗಿದ್ದರೂ ಗಿಡ-ಮರಗಳೆಲ್ಲ ಇನ್ನೂ ಪಾರತಂತ್ರ್ಯದಲ್ಲಿಯೇ ಇದ್ದವು. ಅವುಗಳಿಗೆ ನೆಮ್ಮದಿಯಿಂದ ಬೆಳೆಯಲು ಅವಕಾಶವಿರಲಿಲ್ಲ.

ಕೆನಿಯನ್ಸ ಕೂಡ ವಸಾಹತುಗಾರರಂತೆ ಗಿಡ-ಮರಗಳನ್ನು ಕಡಿದು ಮಾರಾಟ ಮಾಡತೊಡಗಿದ್ದರು. ಗಿಡ-ಮರಗಳಿರುವ ಭೂಮಿಯಲ್ಲಿ ಚಹ, ಕಾಫಿ ಮತ್ತು ತಂಬಾಕುಗಳನ್ನು ಬೆಳೆಸಿ ಸಿರಿವಂತ ದೇಶಗಳಿಗೆ ಮಾರುತ್ತಿದ್ದರು. ಇದರಿಂದ ಅವರಿಗೆ ಸಾಕಷ್ಟು ಹಣ ದೊರೆಯತೊಡಗಿತು.



ವಾಂಗಾರಿ ಇಡೀ ದೇಶವನ್ನು ಸುತ್ತಾಡಿ ಕಾಡು ಪ್ರಾಣಿಗಳ ಅಭ್ಯಾಸ ಮಾಡುತ್ತಿದ್ದಾಗ ಅವಳಿಗೆ ಆಘಾತವಾಯಿತು. ಕಾಡು ಪ್ರಾಣಿಗಳು ನಶಿಸುತ್ತಿದ್ದವು. ಗಿಡ ಕಡಿಯುವ ಗರಗಸಕ್ಕೆ ಅಂಜಿ ಓಡಿ ಹೋಗುತ್ತಿದ್ದವು. ಧಾನ್ಯ ಬಿತ್ತುವ ಭೂಮಿಗಳಲ್ಲಿ ನಗದು ಹಣ ಕೊಡುವ ಬೆಳೆಗಳನ್ನು ಬೆಳೆಯತೊಡಗಿಂದಾಗಿನಿಂದ ಮಹಿಳೆಯರು ಮಕ್ಕಳಿಗೆ ಸರಿಯಾಗಿ ಉಣ್ಣಿಸುತ್ತಿರಲಿಲ್ಲ. ನದಿ-ಹಳ್ಳಗಳೆಲ್ಲ ಕೆಸರಿನಿಂದ ತುಂಬಿದ್ದವು. ಏಕೆಂದರೆ ಮಳೆ ಬಿದ್ದಾಗ ಮಣ್ಣನ್ನು ತಡೆಹಿಡಿದಿಡಲು ಗಿಡಗಳ ಬೇರುಗಳೇ ಇರಲಿಲ್ಲ.



ವಾಂಗಾರಿಗೆ ತನ್ನ ಶಿಕ್ಷಣ ಮತ್ತು ಭೇಟ್ಟಿಯಾದ ಜನರನ್ನು ಹೇಗೆ ಉಪಯೋಗಿಸಬೇಕು ಎಂಬುದು ತಿಳಿದಿತ್ತು.
ನಿಬಿಡವಾದ ಕಾಡುಗಳು ಮಾನವರ ಬಹುಮೂಲ್ಯವಾದ ಸಂಪತ್ತು ಎಂದು ಜಗತ್ತಿನಲ್ಲಿಯ ಮುಂದಾಳುಗಳಿಗೆ ಮತ್ತು ಕೆನಿಯಾದ ಒಕ್ಕಲಿಗರಿಗೆ ತಿಳಿಸಿ ಹೇಳಿದಳು. ಸಾವಿರಾರು ಗಿಡಗಳನ್ನು ಬೆಳೆಸಿದರೆ ನಮ್ಮ – ಪುರುಷರ ಮತ್ತು ಮಹಿಳೆಯರ, ಶ್ವೇತ ಮತ್ತು ಕೃಷ್ಣ ವರ್ಣದ, ಸಿರಿವಂತರ ಮತ್ತು ಬಡವರ, ಕೆನಿಯಾ ಇಲ್ಲವೆ ಉಳಿದೆಲ್ಲ ದೇಶದಲ್ಲಿಯ- ಜನಜೀವನವನ್ನೇ ಮಾರ್ಪಾಡಿಸಲು ಸಾಧ್ಯವೆಂದು ಅವಳು ಹೇಳುತ್ತಿದ್ದಳು.
ವಾಂಗಾರಿಯ ತಾಯಿ *ಇದರಲ್ಲಿಯ ಕಟ್ಟಿಗೆಗಿಂತ ಈ ಮರದ ಮೂಲ್ಯ ಇನ್ನು ಹೆಚ್ಚಿದೆ* ಎಂದು ಹೇಳಿದ್ದನ್ನು ವಾಂಗಾರಿ ಮರೆತಿರಲಿಲ್ಲ. ನೆರಳು, ಹಣ್ಣು, ಸ್ವಚ್ಛ ಹವೆ, ಪಕ್ಷಿಗಳಿಗೆ ಗೂಡು ಮುತಾದವುಗಳನ್ನು ಒದಗಿಸುವ ಗಿಡಗಳು ನಮ್ಮ ಆಯುಷ್ಯಕ್ಕೆ ನಾಡಿಮಿಡಿತ ಕೊಡುವ ಸಂಪತ್ತಿಗೆ ಸರಿ. ಗಿಡಗಳೆಂದರೇ ನಮ್ಮ ಭವಿಷ್ಯದ ತುಣುಕು.

ವಾಂಗಾರಿಗೆ ಜಗತ್ತಿಗೆನೇ ಕೂಗಿ ಹೇಳಬೇಕೆಂದು ಅನ್ನಿಸುತ್ತಿತ್ತು. ಆದರೆ ಬದಲಾವಣೆ ಮೆಲ್ಲ ಮೆಲ್ಲಗೆ ಆಗುತ್ತದೆ. ಅವಳಿಗೆ ಸುಮ್ಮನಿರಲು ಶಕ್ಯವಾಗಲಿಲ್ಲ. 1977ರಲ್ಲಿ ಗಿಡಗಳನ್ನು ತ್ವರಿತವಾಗಿ ನೆಡಲೇಬೇಕೆಂದು ಒತ್ತಾಯ ಮಾಡಲಿಕ್ಕೆ ಗ್ರೀನ ಬೆಲ್ಟ ಮೂವ್ಹಮೆಂಟನ್ನು ಪ್ರಾರಂಭಿಸಿದಳು.

ಹಳ್ಳಿ-ಹಳ್ಳಿಗಳಲ್ಲಿ ಸುತ್ತಾಡಿ ಅವಳು ಗಿಡ-ಮರ, ಪ್ರಾಣಿ-ಪಕ್ಷಿ, ಮಕ್ಕಳು ಇವರ ಬಗ್ಗೆ ಹೇಳುತ್ತಿದ್ದಳು. 'ಈಗಿನ ದಿವಸಗಳು ಕಷ್ಟ-ನೋವುಗಳಿಂದ ತುಂಬಿದ್ದರೂ ಮುಂಬರುವ ಭವಿಷ್ಯದ ಬಗ್ಗೆ ವಿಚಾರ ಮಾಡಿ' ಎಂದು ಹೇಳುತ್ತಿದ್ದಳು. ತಮ್ಮ ತಮ್ಮ ಭಾಷೆಯಲ್ಲಿ ಇವೆಲ್ಲವುಗಳ ಬಗ್ಗೆ, ತಮ್ಮ ಮುಂದಿರುವ ಸಮಸ್ಯೆಗಳ ಬಗ್ಗೆ ಚರ್ಚಿಸಲು ಅವಳು ಉತ್ತೇಜನ ಕೊಡುತ್ತಿದ್ದಳು.

ಅವಳ ಹೇಳಿಕೆ ಹಳ್ಳಿಗಳಲ್ಲಿ, ವರ್ತಮಾನ-ಪತ್ರಗಳಲ್ಲಿ, ಕೆನಿಯ ಶಾಸನಕ್ಕೆ ಕಳಿಸಿದ ಪತ್ರಗಳಲ್ಲಿ ಮತ್ತು ಆಂತರರಾಷ್ಟ್ರೀಯ ಸಂಸ್ಥೆಗಳಲ್ಲಿ ತಲುಪಿತು. ಸಾವಿರಾರುಗಟ್ಟಲೆ ಈಮೊದಲು ಕಡಿದ ಗಿಡಗಳ ಜಾಗದಲ್ಲಿ ಮತ್ತೇ ಗಿಡಗಳನ್ನು ಹಚ್ಚಬೇಕಾದರೆ ಹಣ ಬೇಕು. ಹಾಗು ಗಿಡಗಳು ಬಹು ದುಬಾರಿ.



ಕೆನಿಯಾದ ಎಲ್ಲ ಹಳ್ಳಿಗಾಡುಗಳಲ್ಲಿ ವಾಂಗಾರಿ ಸಸಿಗಳ ನರ್ಸರಿಗಳನ್ನು ಪ್ರಾರಂಭಿಸಿ ಅದರ ಹೊಣೆಯನ್ನು ಹಳ್ಳಿಯ ಹೆಂಗಳೆಯರಿಗೆ ಒಪ್ಪಿಸಿದಳು. ಪ್ರತಿಯೊಂದು ಗಿಡ ಬೆಳೆದಾಗ ಆ ಹೆಂಗಳೆಯರಿಗೆ ಹಣ ಒದಗಿಸುವ ವ್ಯವಸ್ಥೆಯನ್ನು ಅವಳು ಮಾಡಿದಳು.

ಕಾಡನ್ನೆಲ್ಲ ಹಾಳು ಮಾಡಿ ಸಿರಿವಂತರಾದ ಸರಕಾರಿ ಅಧಿಕಾರಿಗಳು ವಾಂಗಾರಿಯನ್ನು ತಡೆಹಿಡಿಯಲು ಪ್ರಯತ್ನಿಸಿದರು. ಇಷ್ಟೊಂದು ಆತ್ಮವಿಶ್ವಾಸದಿಂದ ನಮ್ಮನ್ನು ಎದುರಿಸುವ ಈ ಹೆಂಗಸು ಯಾರು? ಉಳಿದ ಹೆಣ್ಣು ಮಕ್ಕಳಂತೆ ಮನೆಯಲ್ಲಿದ್ದು ಗಂಡಸರ ಕಣ್ಣಿಗೆ ಕಣ್ಣು ಕೊಡಲಾರದೆ ತೆಪ್ಪಗೆ ಕೂಡುವದು ಬಿಟ್ಟು ಇದೆಂತಹ ಉಪದ್ವ್ಯಾಪ ಮಾಡುತ್ತಿದ್ದಾಳೆ ಎಂದು ತೆಗಳಿದರು.

ಆತ್ಮವಿಶ್ವಾಸವಿದ್ದ ಮಹಿಳೆಯರು ಮನೆ, ಹಳ್ಳಿ ಮತ್ತು ಸಂಪೂರ್ಣ ಆಫ್ರಿಕಾ ಖಂಡದಲ್ಲಿಯೇ ಮಹತ್ವದ ಪಾತ್ರವನ್ನು ವಹಿಸಬಲ್ಲರು ಎಂದು ವಾಂಗಾರಿ ನಂಬಿದ್ದಳು. ಅವಳು ಸುಮ್ಮನೆ ಇರಲಾರಳು. ಎಷ್ಟೋ ಅಕ್ಕ-ತಂಗಿಯರು ಸುತ್ತಮುತ್ತಲು ಸಹಾಯಕ್ಕಾಗಿ ಇದ್ದಾಗ "ಚಿರತೆಯ ನಂಟುತನ" ವಿದ್ದವಳು ನಿರುತ್ಸಾಹಿಯಾಗಲಾರಳು. ಅವಳು ಕಾಡನ್ನು ಬೆಳೆಸತೊಡಗಿದಳು.



ವಾಂಗಾರಿ ಇನ್ನು ಮುಂದೆ ಒಂದೂ ಗಿಡವನ್ನು ಕಡಿಯಲು ಕೊಡುವದಿಲ್ಲ ಎಂದು ನಿಶ್ಚಯಿಸಿದಳು. ಅವಳು ಯಾರಿಗೂ ಅಂಜುತ್ತಿರಲಿಲ್ಲ. 24 ವರುಷ ಕೆನಿಯಾದ ರಾಷ್ಟ್ರಾಧ್ಯಕ್ಷರಿದ್ದ ಡೇನಿಯಲ್ ಆರಾಪ ಮೋಯಿ ಎದುರು ಕೂಡ ಅವಳು ತಲೆ ಬಗ್ಗಿಸಲಿಲ್ಲ.

ಅವನು ನೈರೋಬಿಯ ಮಧ್ಯದಲ್ಲಿರುವ ಉರುಹಿ ಉದ್ಯಾನದಲ್ಲಿ 60 ಅಂತಸ್ತು ಎತ್ತರದ ತನ್ನ ಪುತ್ಥಳಿಯನ್ನು ನಿರ್ಮಿಸುವ ಹಂಚಿಕೆ ಹಾಕಿದ್ದನು. ಆದರೆ ವಾಂಗಾರಿಯ ಸಹಯೋಗಿಗಳೆಲ್ಲ ಪ್ರತಿಭಟಿಸಿ ನೆಲಸಮ ಮಾಡಲು ಬಂದಿರುವ ಬುಲ್ ಡೋಝುರಗಳನ್ನು ಓಡಿಸಿದರು. ಹೀಗಾಗಿ ರಾಷ್ಟ್ರಾಧ್ಯಕ್ಷನಿಗೆ ಯೋಜನೆಯ ಕೈಬಿಡಬೇಕಾಯಿತು.

ಆ ಮೇಲೆ ಡೇನಿಯಲ್ ಆರಾಪ ಮೋಯಿ ಕರುರಾ ಅರಣ್ಯದಲ್ಲಿ ದೊಡ್ಡ ಪ್ರಮಾಣದಲ್ಲಿ ಕಟ್ಟಡಗಳನ್ನು ಕಟ್ಟುವ ಯೋಜನೆ ಹಾಕತೊಡಗಿದನು. ಈ ಯೋಜನೆ ಕಾರ್ಯರೂಪಕ್ಕೆ ಬಂದಿದ್ದರೆ ನೀಲಿ ಕೋತಿ ಮತ್ತು ನದಿಗಳಲ್ಲಿ ವಾಸಿಸುವ ಕೆಲ ಜಾತಿಯ ಪ್ರಾಣಿಗಳೇ ನಿರ್ವಂಶರಾಗುವ ಸಾಧ್ಯತೆ ಇತ್ತು. ವಾಂಗಾರಿ ಇದರ ವಿರುದ್ಧ ಹೋರಾಟಕ್ಕೆ ಸಿದ್ಧಳಾದಳು. ಇಡೀ ವಿಶ್ವಕ್ಕನೇ  ಈ ಪ್ರಾಣಿ ವಂಶಗಳನ್ನು ಉಳಿಸಲು, ಗಿಡಗಳನ್ನು ನೆಡಲು ಮತ್ತು ರಾಷ್ಟ್ರಾಧ್ಯಕ್ಷನಿಗೆ ಹಿಂದೆ ಸರಿಯಲು ಕರೆಕೊಟ್ಟಳು.

ಅವಳು ತನ್ನ ಈ ಹೋರಾಟದಲ್ಲಿ ಗೆದ್ದಾಗ *ನೀನೇ ನಿಜವಾಗಿಯೇ ಧೈರ್ಯವಿದ್ದವಳು* ಎಂದು ಓರ್ವ ಕೆನಿಯಾದ ಯುವಕನು ಅವಳನ್ನು ಪ್ರಶಂಸಿದನು.





ಆದರೆ ಡೇನಿಯಲ್ ಆರಾಪ ಮೋಯಿಯಂತಹ ಅಧಿಕಾರದ ಮದ ಸೇರಿದವರು ಹಿಂಸೆ ಕೊಡಲು ಕೂಡ ಹೇಸಲಾರರು. ವಾಂಗಾರಿಯ ಜೀವವನ್ನೇ ತೆಗೆದುಕೊಳ್ಳಲಿಕ್ಕೆ ಸಜ್ಜಾದವರು. ಅವಳ ಬಾಯಿ ಮುಚ್ಚಿಸಲು ಏನು ಬೇಕಾದರೂ ಮಾಡಬಹುದು. ಅವನು ಒಬ್ಬ ಬಲಶಾಲಿ ಅಧಿಕಾರಿ. ಪ್ರತಿಭಟಿಸುವ ಗುಂಪಿನ ಮೇಲೆನೇ ಗುಂಡು ಹಾರಿಸಿದವ.

ಅವಳನ್ನು ಅವಮಾನಿಸಿದನು, ಹೊಡೆದನು, ಬಡೆದನು, ಎಷ್ಟೋ ಸಲ ಜೈಲಿಗೆ ಕಳುಹಿಸಿದನು. ಆದರೆ ಅವಳು ಹಿಂಜರಿಯಲಿಲ್ಲ. ಜೈಲಿನಿಂದ ಬಿಡುಗಡೆ ಆದ ದಿನವೇ ರಾಜಕೀಯ ಕೈದಿಗಳಿಗೆ ಹಿಂಸೆ ಕೊಡಕೂಡದು ಎಂದು ಹೋರಾಡಿದಳು. ವಾಂಗಾರಿಗೆ ಎಷ್ಟೋ ಸಲ ಜೀವವನ್ನ ತೆಗೆದುಕೊಳ್ಳುವ ಬೆದರಿಕೆ ಬಂದಾಗ ಅವಳಿಗೆ ಕೆನಿಯಾ ಬಿಟ್ಟು ಹೊರ ದೇಶದಲ್ಲಿ ಇರಬೇಕಾಗುತ್ತಿತ್ತು. ಆದರೂ ಅವಳು ಅಂಜಲಿಲ್ಲ.



ವಾಂಗಾರಿಗೆ ಗಿಡ – ಮರಗಳಂತೆ ಪ್ರಜಾಪ್ರಭುತ್ವ ಕೂಡ ಬೆಳೆಯಬೇಕು ಎಂಬ ಆಸೆ. ತನ್ನ ದೇಶದ ಪ್ರಜೆಗಳೆಲ್ಲ ಒಟ್ಟುಗೂಡಿ ಕಾನೂನುಗಳನ್ನು ನಿರ್ಧರಿಸಿದರೆ ದೇಶವು ಬಲಶಾಲಿಯಾಗುವದು ಎಂದು ವಂಗಾರಿಗೆ ನಂಬಿಕೆ.



ಕೆನಿಯಾದ ಮಕ್ಕಳು ಕಾಡಿನ ಅಂಚಿನಲ್ಲಿರುವ ಅಂಜೂರಿ ಗಿಡದ ಕೆಳಗಿನ ಸ್ವಚ್ಛ ನೀರಿನ ಹೊಳದಲ್ಲಿ ಆಟವಾಡುತ್ತಿರುವನ್ನು ನೋಡುವದು ಅವಳ ಕನಸಾಗಿತ್ತು. ಹಸಿವೆಯಾದಾಗ ಅವರಿಗೆ ಹೊಟ್ಟೆತುಂಬ ಊಟ ದೊರೆಯಬೇಕೆಂದು ಅವಳಿಗೆ ಅನ್ನಿಸುತ್ತಿತ್ತು.

ಗಿಡಗಳನ್ನು ಉಳಿಸಲು ಇನ್ನೂ ಎಷ್ಟೋ ಕಾಳಗಗಳಲ್ಲಿ ಕಾದಾಡಬೇಕಾಗುವದು ಎಂಬುದು ಅವಳಿಗೆ ಕೂಡಲೇ ತಿಳಿಯಿತು. ಚುನಾವಣೆ ಕಾರ್ಯಾಲಯಗಳಿಗೆ ಅವಳು ಎಡತಾಕಿದಳು. ಪರಿಸರ ರಕ್ಷಣೆಗಾಗಿ ತನ್ನದೇ ಆದ ರಾಜಕೀಯ ಪಕ್ಷ ಕಟ್ಟಲು ಹವಣಿಸಿದಳು. ಡೇನಿಯಲ್ ಆರಾಪ ಮೋಯಿಯ ವಿರುದ್ಧ ಹೋರಾಟಕ್ಕಿಳಿದು ಅವನನ್ನು ಪದಚ್ಯುತ ಗೊಳಿಸಲು ಪ್ರಯತ್ನ ಮಾಡತೊಡಗಿದಳು.



ರಾಷ್ಟ್ರಾಧ್ಯಕ್ಷರ ವಿರೋಧದಲ್ಲಿ ದಿನದಿನಕ್ಕೆ ಹೆಚ್ಚಾಗುತ್ತಿದ್ದ ಪ್ರತಿಭಟನೆಗಳಿಂದಾಗಿ ಮೋಯಿಯು ಬೇರೆ ಬೇರೆ ಪಂಗಡಗಳಲ್ಲಿ ಜಗಳ ಹಚ್ಚಿ ರಾಜ್ಯವಾಳುವಲು ಪ್ರಯತ್ನಿಸ-ತೊಡಗಿದನು. ಜನಾಂಗಗಳು ಜಗಳದಲ್ಲಿ ಸಿಕ್ಕಿ ಬಿದ್ದರೆ ರಾಜ್ಯವಾಳುವದು ಸುಲಭ ಎಂದು ಅವನ ಹಂಚಿಕೆ.

ವಾಂಗಾರಿ ಮತ್ತು ಗ್ರೀನ ಬೆಲ್ಟ ಮೂವ್ಹಮೆಂಟ ಮೋಯಿಯ ಗತ್ತನ್ನು ಕಂಡು ಹಿಡಿದು ಅದನ್ನು ವಿಫಲಗೊಳಿಸಿದರು. ನರ್ಸರಿಗಳಲ್ಲಿ ಬೆಳೆಯುತ್ತಿರುವ ಗಿಡದ ಸಸಿಗಳನ್ನು ಪಂಗಡ-ಪಂಗಡಗಳಲ್ಲಿ ಹಂಚುತ್ತ ಶಾಂತಿಯ ಸಂದೇಶವನ್ನು ಕಳಿಸಿಕೊಟ್ಟಳು.

ಕೆಲ ಅವಧಿಯಲ್ಲಿಯೇ ಈ ಶಾಂತಿ ಗಿಡಗಳು ತಮ್ಮ ಕೆಲಸ ಮಾಡಿದವು. ವಾಂಗಾರಿ ಸೈನಿಕರಿಗೆ  ಕೂಡ ತಿಳಿ ಹೇಳಿ ಪಂಗಡಗಳಲ್ಲಿ ಗೆಳೆತನವನ್ನು ಬೆಳಿಸಿದಳು.





ಕೊನೆಗೆ 2002ರಲ್ಲಿ ಈ ರಾಷ್ಟ್ರಾಧ್ಯಕ್ಷನ ದಬ್ಬಾಳಿಕೆ ಮುಗಿಯಿತು. ದೇಶಕ್ಕಾಗಿ ಒಂದು ಹೊಸ ಸಂವಿಧಾನ ಜಾರಿಯಾಯಿತು. ಈ ಸಂವಿಧಾನದ ಮೇರೆಗೆ ಈಗಿನ ರಾಷ್ಟ್ರಾಧ್ಯಕ್ಷ ನಿವೃತ್ತರಾಗಿ ಹೊಸ ರಾಷ್ಟ್ರಾಧ್ಯಕ್ಷರನ್ನು ಆರಿಸಲಾಯಿತು. ವಾಂಗಾರಿಯು ಕೂಡ ಸಂಸತ್ತಿನ ಸದಸ್ಯಳಾಗಿ ಆರಿಸಿ ಬಂದಳು. ಹೊಸ ರಾಷ್ಟ್ರಾಧ್ಯಕ್ಷರು ವಾಂಗಾರಿಯನ್ನು ಪರಿಸರ, ನೈಸರ್ಗಿಕ ಸಂಪತ್ತು ಮತ್ತು ಕಾಡುಪ್ರಾಣಿಗಳ ಸಚಿವಳೆಂದು ನೇಮಿಸಿದರು.

ಜನರೆಲ್ಲ ಪ್ರೀತಿಯಿಂದ ಅವಳನ್ನು ಮಮಾ ಮಿತಿ – ಎಂದರೆ ಗಿಡಗಳ ತಾಯಿ – ಎಂದು ಕರೆಯತೊಡಗಿದರು. ಅವಳ ಜೀವನದ ಒಂದು ಹೊಸ ಕತೆ ಶುರು ಆಯಿತು. ಅವಳು ಈಗ ನಿರ್ಣಯಗಳನ್ನು ಮಾಡುವ  ಅಧಿಕಾರ ಹೊಂದಿದ್ದಳು.

ಗಂಡಸರಿಗೆ, ಹೆಂಗಳೆಯರಿಗೆ ಮತ್ತು ಗಿಡ-ಮರಗಳಿಗೆ ಕೂಡ... ಕೆನಿಯಾವನ್ನು ಒಂದು ಒಳ್ಳೆಯ ದೇಶ ಕಟ್ಟಲು ಅವಳು ನಿಶ್ಚಯಿಸಿದಳು.



ವಾಂಗಾರಿ ಗಿಡ ನೆಡುವ ಮತ್ತು ಪ್ರಜಾಪ್ರಭುತ್ವ ಪ್ರಸ್ಥಾಪನೆಯ ಕೆಲಸ ಪ್ರಾರಂಭಿಸಿದ ದಿನಕ್ಕಿಂತ ಇಂದು ಕೆನಿಯಾದಲ್ಲಿ ಎಷ್ಟೋ ಪಟ್ಟು ಹೆಚ್ಚು ಗಿಡ-ಮರಗಳಿವೆ. ಗ್ರೀನ ಬೆಲ್ಟ ಮೂವ್ಹಮೆಂಟ ಜಗತ್ತಿನಲ್ಲಿಯೇ ಎರಡನೇ ಕ್ರಮಾಂಕದಲ್ಲಿದ್ದ ಕಾಂಗೋ ಬೇಸಿನ್ ದಂತಹ ಕಾಡಿನಲ್ಲಿಯ ಗಿಡಗಳನ್ನು ರಕ್ಷಿಸುತ್ತಲಿದೆ.
ವಾಂಗಾರಿ ಮಾಥಾಯ್ ಮತ್ತು ಅವಳ ಸಹಯೋಗಿಗಳು ಕೂಡಿ ಮೂರು ಕೋಟಿಗಳಿಗಿಂತ ಹೆಚ್ಚು ಗಿಡಗಳನ್ನು ಹಚ್ಚಿ ಬೆಳಿಸಿದ್ದಾರೆ. ಪ್ರತಿ ದಿನ – ಈಗಲೂ ಕೂಡ – ಕೆನಿಯಾದಲ್ಲಿ ಗಿಡಗಳನ್ನು ನೆಡುತ್ತಲಿದ್ದಾರೆ.
ವಾಂಗಾರಿ ಮಾಥಾಯ್ ಇವಳಿಗೆ ಆಕ್ಟೋಬರ 8, 2004 ರಲ್ಲಿ ನೋಬೆಲ್ ಶಾಂತಿ ಪಾರಿತೋಷಕ ಕೊಟ್ಟು ಸನ್ಮಾನಿಸಲಾಯಿತು. ಲಕ್ಷಾನುಗಟ್ಟಲೆ ಗಿಡಗಳನ್ನು ನೆಟ್ಟಿ ಅವಳು ಜಗತ್ತಿನಲ್ಲಿಯ ಆಶೆಯನ್ನು ಚಿಗುರಿಸಿದಳು. ಈ ಗಿಡಗಳ ಕೊಡುಗೆ ಬೆಳೆಯುತ್ತಲೇ ಹೋಗುವದು.
ಆಫ್ರಿಕೆಯ ಮಹಿಳೆಗೆ ನೋಬೆಲ್ ಪಾರಿತೋಷಕ ಪಡೆದ ಇವಳೇ ಮೊದಲಿಗಳು. ಮೌಂಟ ಕೆನಿಯಾದ ತಳಪಾಯದಲ್ಲಿರುವ ಅವಳ ನ್ಯೆರಿ ಎಂಬ ಹಳ್ಳಿಯಲ್ಲಿ ಒಂದು ಸಸಿಯನ್ನು ನೆಟ್ಟಿ ಈ ಪಾರಿತೋಷಕದ ಆನಂದವನ್ನು ಆಚರಿಸಿದಳು.
ಸುತ್ತಮುತ್ತಲಿನ ಕಾಡುಗಳು, ಕಾಡುಗಳಲ್ಲಿ ವಾಸಿಸುತ್ತಿದ್ದ ಚಿರತೆ, ಜಿಂಕೆ ಮುಂತಾದ ಪ್ರಾಣಿಗಳಿಗೆಲ್ಲ, ಜನರಿಗೆಲ್ಲ ಈ ದಿನವು ಎಂದಿಗೂ ಮರೆಯಲಾರದ ದಿನವೆಂದು ಅನ್ನಿಸಿರಬಹುದು.

ಮುಕ್ತಾಯ

